ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಮಂಗಳವಾರ, ದಿನಾಂಕ : 23ನೇ ಜುಲೈ, 2019

ಕೆರೆ ಅಭಿವೃದ್ಧಿ ನಾಡಿನ ಶ್ರೇಯೋಭಿವೃದ್ಧಿ ಯೋಜನೆಯು ಮಂದಗತಿಯಲ್ಲಿ ಸಾಗುತ್ತಿರುವ ಬಗ್ಗೆ

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

506 (688) ಮಾನ್ಯ ಸಣ್ಣ ನೀರಾವರಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದ ರೈತರಿಗೆ ಸಹಾಯ ಮತ್ತು ಉತ್ತೇಜನ ನೀಡುವ ಉದ್ದೇಶದಿಂದ "ಕೆರೆ ಅಭಿವೃದ್ಧಿ ನಾಡಿನ ಶ್ರೇಯೋಭಿವೃದ್ಧಿ" ಯೋಜನೆಯನ್ನು ತಂದಿದ್ದರೂ ಇದರ ಫಲ ರಾಜ್ಯದ ರೈತಬಾಂಧವರಿಗೆ ಪರಿಣಾಮಕಾರಿಯಾಗಿ ದೊರಕದೆ ಕೆಲಸ ಕಾರ್ಯಗಳು ಮಂದಗತಿಯಲ್ಲಿ ಸಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಈ ಯೋಜನೆಯಡಿಯಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಆಯ್ಕೆಯಾದ ಕೆರೆಗಳು ಯಾವುವು ; (ತಾಲ್ಲೂಕುವಾರು ವಿವರ ನೀಡುವುದು)

(ಇ) ಬೆಳಗಾವಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ "ಕೆರೆ ಅಭಿವೃದ್ಧಿ ನಾಡಿನ ಶ್ರೇಯೋಭಿವೃದ್ಧಿ" ಯೋಜನೆಯಡಿ ಆಯ್ಕೆಯಾದ ಕೆರೆಗಳ ಕಾಮಗಾರಿಗಳು ಸಂಪೂರ್ಣವಾಗಿ ಮುಗಿದಿವೆಯೇ ;

(ಈ) ಸನ್ 2015-16, 2016-17 ಮತ್ತು 2017-18ನೇ ಸಾಲಿನಲ್ಲಿ ಈ ಯೋಜನೆಯ ಅನುಷ್ಠಾನಕ್ಕೆ ಸರ್ಕಾರವು ಬಿಡುಗಡೆ ಮಾಡಿದ ಅನುದಾನವೆಷ್ಟು ; ಬಾಕಿ ಉಳಿದಿರುವ ಅನುದಾನವೆಷ್ಟು; ವರ್ಷವಾರು, ತಾಲ್ಲೂಕುವಾರು, ಕೆರೆವಾರು (ಪ್ರತಿ ಕೆರೆಗೆ ನಿಗದಿಪಡಿಸಿದ) ಅನುದಾನವೆಷ್ಟು ; (ವಿವರ ನೀಡುವುದು)

(ಉ) ಕೆರೆಗಳಿಗೆ ಸುತ್ತುಮುತ್ತಲಿನ ಮಳೆ ನೀರು ಸಂಗ್ರಹಿಸಲು ಸರ್ಕಾರವು ಕೈಗೊಂಡ ಕ್ರಮಗಳೇನು ?